ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 55-59
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಡಾ.ಕಮಲಾ ಹಂಪನಾರ "ನಾನು ಅಮೃತಮತಿಯಲ್ಲ"

**ಡಾ. ಧನಂಜಯ ಪಾಲಹಳ್ಳಿ**
ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಕನ್ನಡ ವಿಭಾಗ, ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು, ಮೈಸೂರು

***Abstract:***
*"ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್" ಎಂಬ ಕವಿರಾಜಮಾರ್ಗಕಾರನ ನುಡಿ ಕನ್ನಡಿಗರ ಕಾವ್ಯ ಕಟ್ಟುವ ಶಕ್ತಿ ಕುರಿತಾದುದ್ದಾಗಿದೆ. ಅಜ್ಞಾತರು ನಿರ್ಮಿಸಿದ ಅಮರವಾದ ಜನಪದ ಸಾಹಿತ್ಯದ ಅಜ್ಞಾತ ಕವಿಗಳು ಮತ್ತು ಕವಯತ್ರಿಯರನ್ನು ನಿರ್ದೇಶಿಸುತ್ತದೆ. ಅಕ್ಷರದ ಅರಿವಿಲ್ಲದೆ, ಕಾವ್ಯಾಲಂಕಾರದ ಅರಿವಿನ ಹಂಗಿಲ್ಲದೆ ಮೌಖಿಕ ಪರಂಪರೆಯಲ್ಲಿ ಬೆಳೆದು ಬಂದ ಜನಪದ ಸಾಹಿತ್ಯದಲ್ಲಿ ದೇಸಿ ಬದುಕಿನ ಎಲ್ಲವೂ ಸಾಕಾರಗೊಳಿಸುರುವುದು ಕಾಣಸಿಗುತ್ತದೆ. ಜಾನಪದ ಕಾವ್ಯ ಪರಂಪರೆಯಲ್ಲಿ ಆದಿಮ ಮೂಲವನ್ನು ಈ ಕಾವ್ಯ ಪರಂಪರೆಯಲ್ಲೆ ಕಾಣುತ್ತೇವೆ. 12ನೇ ಶತಮಾನದ ಬಹುಮುಖೀ ನೆಲೆಯುಳ್ಳ ವಚನಕಾರರ ಚಳವಳಿಯಲ್ಲಿ, ವರ್ಗ, ವರ್ಣ, ಲಿಂಗಾಧಾರಿತ ನೆಲೆಯ ಅಸಮಾನತೆಗಳ ವಿರುದ್ಧದ ಹೋರಾಟ ಒಂದು ದೊಡ್ಡ ಆಶಯವಾಗಿದ್ದು ಆ ಹೋರಾಟದ ಫಲಿತ ರೂಪವಾಗಿ ಮಹಿಳಾ ಪ್ರತಿನಿಧಿಯಾಗಿ ಅಕ್ಕಮಹಾದೇವಿ ಗೋಚರಿಸುತ್ತಾಳೆ. ಆದ್ದರಿಂದ ಸ್ತ್ರೀ ತನ್ನ ಕಥೆ ಕವಿತೆಯಂತಹ ಸಾಹಿತ್ಯ ಪ್ರಕಾರಗಳಲ್ಲಿ ದಾಖಲು ಮಾಡುತ್ತಾ ಸಮಾಜ ಹೇಳುವ ಮೌಲ್ಯಗಳಿಗಿಂತ ಭಿನ್ನವಾದ ಮನುಷ್ಯ ಸಹಜ ದಾರಿಯನ್ನು ತುಳಿದು ಸ್ವಾತಂತ್ರ್ಯದ ಹೆಜ್ಜೆಗಳನ್ನು ಮೂಡಿಸಿದ್ದಾಳೆ. ಹಾಗೆ ಮೂಡಿದ ಹೆಜ್ಜೆಗಳಲ್ಲಿ ಡಾ.ಕಮಲಾ ಹಂಪನಾ ಅವರ 'ನಾನು ಅಮೃತ ಮತಿಯಲ್ಲ' ಕವಿತೆಯೂ ಕೂಡ ಒಂದಾಗಿದೆ.*

***Keywords:*** *ಕನ್ನಡ ಸಾಹಿತ್ಯ, ಕಮಲಾ ಹಂಪನ, ನಾನು ಅಮೃತಮತಿಯಲ್ಲ, ಸ್ತ್ರೀ ಸಾಹಿತ್ಯ.*

**ಪೀಠಿಕೆ**

'ಮಾತೃ ಮೂಲ ಸಂಸ್ಕೃತಿ' ಯಿಂದ 'ಪಿತೃ ಸಂಸ್ಕೃತಿ'ಯ ಕಡೆಗೆ ಜಾರಿ ಸಂಸ್ಕೃತಿಯನ್ನು ರಕ್ಷಿಸುವ ನೆಪವೊಡ್ಡಿ ಸರಿ–ತಪ್ಪುಗಳನ್ನು ಹೇರುತ್ತಾ ಹೆಣ್ಣನ್ನು ಕಟ್ಟಿ ಹಾಕುವ ಪ್ರಯತ್ನದಲ್ಲಿ ಈ ಸಮಾಜ ಸದಾಕಾಲಕ್ಕೂ ಸರ್ವಸಿದ್ಧವಾಗೆ ಇರುತ್ತದೆ. ಪುರುಷ ಹೇಳುವ ಪವಿತ್ರ–ಅಪವಿತ್ರದ ಪ್ರಶ್ನೆಯಿಂದಾಗಿ ಹೆಣ್ಣು ದ್ಯುತಕ್ಕೆ (ದ್ರೌಪದಿ), ಅಗ್ನಿಗೆ (ಸೀತೆ), ಶಾಪಕ್ಕೆ (ಅಹಲ್ಯೆ) ಮುಂತಾಗಿ ಒಳಗಾಗುತ್ತಲೇ ಬಂದಿದ್ದಾಳೆ. ನೈತಿಕತೆ ಎನ್ನುವ ಸಂಕೋಲೆಯಲ್ಲಿ ಅವಳನ್ನು ಹಿಡಿದಿಟ್ಟು ನಿಯಮ ಕಟ್ಟುಪಾಡುಗಳಲ್ಲಿ ಬದುಕುವಂತೆ ಮಾಡಿದೆ. ಪುರುಷನ ನೆರಳಿನಲ್ಲಿ ಬದುಕಿನ ಅರಿವಿನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳದ ಹೆಣ್ಣುಗಳು ಮಾತ್ರ ಈ ಸಮಾಜಕ್ಕೆ ಯಾವತ್ತು ಪ್ರಿಯರೆ. ಪುರುಷನ ಮಾತು ನಿರ್ಣಯ, ತೀರ್ಮಾನಗಳಿಗೆ ಪ್ರಶ್ನೆ ಮಾಡದೇ ತಲೆಯಾಡಿಸುವ ಕೋಲೆಬಸವ ಪುರುಷ ಪ್ರಧಾನ ಸಮಾಜದಲ್ಲಿ ಆದರ್ಶ ಸ್ತ್ರೀಯಾಗಿದ್ದಾಳೆ.

***Please cite this article as:*** ಧನಂಜಯ ಪಾಲಹಳ್ಳಿ. (2024). ಡಾ.ಕಮಲಾ ಹಂಪನಾರ "ನಾನು ಅಮೃತಮತಿಯಲ್ಲ". *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(1), 55–59

ಜಗತ್ತಿನ ಎಲ್ಲಾ ಜ್ಞಾನ ಶಾಖೆಗಳು ಹೆಣ್ಣಿನ ಬೆರಗಿನ ಒಡಲಿನ ಬಗೆಗೆ ಮಾತನಾಡುತ್ತದೆ. ಸೃಷ್ಟಿಸುವ ಶಕ್ತಿ ಇರುವುದು ಹೆಣ್ಣು ಮತ್ತು ಭೂಮಿಗೆ ಮಾತ್ರ. ಪಾಲಿಸುವ ಲಾಲಿಸುವ, ಆಲಿಸುವ ಹೆಣ್ಣಿನ ಇಂಥ ದೊಡ್ಡ ಶಕ್ತಿ ಸಮಾಜಕ್ಕೆ ಕಾಣದಾಗದೆ ಹೋದದ್ದು ದೊಡ್ಡ ದುರಂತ. ಶ್ರಮಸಂಸ್ಕೃತಿಯ ಬಹುದೊಡ್ಡ ಭಾಗವಾದ ಸ್ತ್ರೀಯರನ್ನು ದಾಖಲಾದ ಚರಿತ್ರೆಯಲ್ಲಿ ಕಡೆಗಣಿಸಲಾಗಿದೆ. ಅವಳನ್ನು ಸೋಲಿಸುವ ಗುಣಾಲಂಕಾರಗಳ ಮೂಲಕವೇ ನೋಡಲಾಗಿದೆ. ಸೋತವರಿಗೂ ಒಂದು ಚರಿತ್ರೆ ಇದ್ದೇ ಇದೆ. ಆ ಚರಿತ್ರೆಯ ಮೂಲೆ ಮೂಡುಕುಗಳಲ್ಲಿ ನೋವಿನ ಛಾಯೆಯಿಲ್ಲದ್ದಿದ ಒಳಸುಳಿಗಳನ್ನು ಹುಟ್ಟುಹಾಕಬಲ್ಲ ಅನೇಕ ಸಂಗತಿಗಳಿವೆ. ಪ್ರಜ್ಞೆಯ ಆಳದಲ್ಲಿ ಸ್ತ್ರೀ ತನ್ನ ಅಸ್ತಿತ್ವಕ್ಕಾಗಿ ನಡೆದ ಘರ್ಷಣೆಗಳಲ್ಲಿ ತನ್ನದೆಯಾದ ಚರಿತ್ರೆಯನ್ನು ಕಟ್ಟಿಕೊಡುವ ಮಹತ್ವದ ಹೆಜ್ಜೆಗಳನ್ನು ಅಂದಿನಿಂದಲೂ ಮಾಡುತ್ತಲೆ ಇದ್ದಾಳೆ. ಆದ್ದರಿಂದ ಸ್ತ್ರೀ ತನ್ನ ಕಥೆ ಕವಿತೆಯಂತಹ ಸಾಹಿತ್ಯ ಪ್ರಕಾರಗಳಲ್ಲಿ ದಾಖಲು ಮಾಡುತ್ತಾ ಸಮಾಜ ಹೇಳುವ ಮೌಲ್ಯಗಳಿಗಿಂತ ಭಿನ್ನವಾದ ಮನುಷ್ಯ ಸಹಜ ದಾರಿಯನ್ನು ತುಳಿದು ಸ್ವಾತಂತ್ರ್ಯದ ಹೆಜ್ಜೆಗಳನ್ನು ಮೂಡಿಸಿದ್ದಾಳೆ. ಹಾಗೆ ಮೂಡಿದ ಹೆಜ್ಜೆಗಳಲ್ಲಿ ಒಂದು

ಡಾ.ಕಮಲಾ ಹಂಪನಾ ಅವರ 'ನಾನು ಅಮೃತ ಮತಿಯಲ್ಲ' ಕವಿತೆ

*ನಾನು ಅಮೃತ ಮತಿಯಲ್ಲ*
*ನನಗೆ ಬೇಕಿಲ್ಲ ಅಷ್ಟವಂಕ*
*ತಿನ್ನಿಸಲಾರೆ ವಿಷದ ಲಡ್ಡುಗೆ.*

*ನಾನು ಸುನಂದೆಯಲ್ಲ*
*ಗಂಡನ ಅಳಿವನಲ್ಲಿ ನಾ ಸಾವ ಕಾಣಲು*
*ನಾನು ಸೀತೆಯಲ್ಲ*
*ಅವನೊಡ್ಡಿದ ಅಗ್ನಿಕುಂಡ ಹಾಯಲು*
*ನಾನು ಊರ್ಮಿಳೆಯೂ ಆಗಲಾರೆ*
*ಅವದೂರ ಸರಿಯೆ ಸನ್ಯಾಸಿಯಾಗಲು*
*ನಾನು ಅಪರ್ಣೆಯೂ ಅಲ್ಲ*
*ತಪಸ್ವಿಯಾಗಿ ಅವನ ಪಡೆಯಲು*

*ನಾನು ಸಾವಿತ್ರಿ ಮೊದಲೇ ಅಲ್ಲ*
*ಕೆಳಗೆ ಬಿದ್ದ ಅವನ ಮೇಲೆತ್ತಲು*
*ನನ್ನಂತೆಯೇ ನೀನು ಎಂದು*
*ಅವನು ನನ್ನನ್ನು ಕಂಡಾಗ*
*ನಾನೊಬ್ಬ ಮಾನವಳು*
*ನಾನು ನಾನಾಗಿಯೇ ಉಳಿಯುವೆ ಕಮಲಾ ಪ್ರಿಯ*

ನಾಡೋಜಾ ಡಾ.ಕಮಲಾ ಹಂಪನಾ ಅವರು ದೊಡ್ಡ ವಿದ್ವಾಂಸರು, ಶ್ರೇಷ್ಠ ಪ್ರಾಧ್ಯಾಪಕರು, ಪ್ರಾಚೀನ ಕನ್ನಡ ಸಾಹಿತ್ಯ, ಜೈನ ಸಾಹಿತ್ಯ ಹಾಗೂ ಪಠ್ಯವಿಮರ್ಶೆ ಅವರ ಕೃತಿ ಕ್ಷೇತ್ರಗಳಲ್ಲಿ ಪರಿಣಾಮಕಾರಿ ನೆಲೆಯಲ್ಲಿ ಮೂಡಿಬಂದಿವೆ. ಮಹಿಳಾ ಮತ್ತು ದಲಿತ ಚಳುವಳಿಯಲ್ಲಿ ತೊಡಗಿಸಿಕೊಂಡು ಕವಿತೆ, ಕಥೆ, ಕಾದಂಬರಿ, ನಾಟಕ, ಆತ್ಮಚರಿತ್ರೆ, ಜೀವನ ಚರಿತ್ರೆ, ಸಂಶೋಧನೆ, ಸಂಪಾದನೆ, ಮಕ್ಕಳ ಸಾಹಿತ್ಯ, ಅನುವಾದ ಸಾಹಿತ್ಯ, ಸಾಹಿತ್ಯ ವಿಮರ್ಶೆ ಸೇರಿದಂತೆ ಹತ್ತು ಹಲವು ಸಾಹಿತ್ಯ ಪ್ರಕಾರಗಳಲ್ಲಿ ಕೃಷಿ ಮಾಡಿ ಎಂಬತ್ತಕ್ಕು ಹೆಚ್ಚು ಹೊತ್ತಿಗೆಗಳನ್ನು ಕನ್ನಡ ಸಾರಸತ್ವ ಲೋಕಕ್ಕೆ ನೀಡಿದ್ದಾರೆ. ಅವರ ಪ್ರಸ್ತುತ "ನಾನು ಅಮೃತ ಮತಿಯಲ್ಲ' ಎಂಬ ಕವಿತೆ 'ಬಿಂದಲಿ' ಕವನ ಸಂಕಲನದಲ್ಲಿದೆ.

ನಮ್ಮ ಪುರಾಣ, ಮಹಾಕಾವ್ಯ, ಇತಿಹಾಸಗಳು ಮಹಿಳೆಯನ್ನು ಕುರಿತಂತೆ ಒಂದೊಂದು ಬಗೆಯ ಆದರ್ಶ, ಸ್ಫೂರ್ತಿ ಎಂಬ ನೆಲೆಯಲ್ಲಿನ ಸ್ತ್ರೀ ಪ್ರತಿಮೆಗಳನ್ನು ಅದಾಗಲೇ ನೀಡಿ ಬಿಟ್ಟಿವೆ. ಉದಾಹರಣೆ; ರೇಣುಕೆ ತನ್ನ ಪಾವಿತ್ರ್ಯದ ಬಲದಿಂದಲೇ ನದಿಯ ತಡಿಯ ಹಸಿಮಣ್ಣಿನಿಂದ ಕೊಡವನ್ನು ಮಾಡಿ ಆ ಕೊಡದಲ್ಲಿ ನೀರನ್ನು ತರುತ್ತಿದ್ದಳು. ಒಂದು ದಿನ ನದಿ ತಟದಲ್ಲಿ ಶೃಂಗಾರದ ದೃಶ್ಯವನ್ನು ನೋಡಿ ಮೋಹಗೊಳ್ಳುತ್ತಾಳೆ. ಹಾಗೆ

ಮೋಹಗೊಂಡ ರೇಣುಕೆಯನ್ನು ಗಂಡ ಜಮದಗ್ನಿ ಪರಶುರಾಮನಿಗೆ (ಅವತಾರ ಪುರುಷ) ಕೊಲ್ಲುವಂತೆ ಆದೇಶಿಸುತ್ತಾನೆ. ಅಂಥಾ ದೃಶ್ಯವನ್ನು ಕಂಡ ಮಾತ್ರಕ್ಕೆ ಮನಸ್ಸು ವಿಚಲಿತವಾದ ಮಾತ್ರಕ್ಕೆ ಅವಳನ್ನು ಕೊಲೆ ಮಾಡಬೇಕು ಎನ್ನುವ ಕ್ರೂರ ನಿಲುವಿಗೆ ಬರುವುದು ನಾಗರೀಕ ಸಮಾಜದ ದುರಂತ ಅಲ್ಲವೆ?

ಹಾಗೆ ದುರಂತವೆಂದರೆ ಸೀತೆ, ಊರ್ಮಿಳಾ, ಸಾವಿತ್ರಿ, ದ್ರೌಪದಿ, ಸುನಂದೆ, ಅಮೃತಮತಿ–ಈ ಯಾವ ಮಹಿಳಾ ಪ್ರತೀಕಗಳು ಪ್ರತಿಮೆಗಳು, ಪಿತೃಸತ್ತಾತ್ಮಕ ಸಮಾಜದ ಜೀವಪರ ನಿಲುವನ್ನು ವಿವರಿಸುತ್ತಿಲ್ಲ. ಮಹಿಳೆಯನ್ನು ಕುರಿತಂತೆ ಅ ಸಮಾಜ ಎಂತಹ ಕ್ರೌರ್ಯವನ್ನು ಆತ್ಯಂತಿಕವಾಗಿ ವ್ಯಕ್ತಪಡಿಸಲು ಸಾಧ್ಯ ಎಂಬುದರ ದ್ಯೋತಕವಾಗಿ ಅವುಗಳು ಕಂಡುಬರುತ್ತವೆ. ಎಚ್ಚೆತ್ತುಕೊಂಡ ಮಹಿಳೆಯರಾರಿಗೂ ಆ ಪಾತ್ರಗಳನ್ನು, ಪ್ರತೀಕಗಳನ್ನು, ವ್ಯಕ್ತಿತ್ವಗಳನ್ನು ಸ್ವೀಕರಿಸಲು ಸಾಧ್ಯವೇ ಇಲ್ಲ. ಮಧ್ಯಂತರದ ತಲೆಮಾರಿನ ಮಹಿಳಾ ಕಾವ್ಯ ಆ ನಿರಾಕರಣೆಯನ್ನು ಅತ್ಯಂತ ತೀವ್ರವಾಗಿ, ಪ್ರಜ್ಞಾಪೂರ್ವಕವಾಗಿ ಮಾಡುತ್ತಲೇ ಬಂದಿದೆ. ಏಕೆಂದರೆ ಜಾಗೃತ ಮಹಿಳೆಗೆ ಗೊತ್ತಿದೆ: ಈ ಪ್ರತೀಕಗಳನ್ನು ತಾನು ಒಪ್ಪುವುದಾದರೆ ತನ್ನನ್ನು ತಾನೆ ನಿರಾಕರಿಸಿಕೊಂಡಂತೆ ಎಂದು ಹಾಗಾಗಿಯೇ ಈ ಕವಿತೆಯ ನಾಯಕಿ "ನಾನು ಅಮೃತಮತಿಯಲ್ಲ, ಸುನಂದೆಯಲ್ಲ, ಸೀತೆ–ಊರ್ಮಿಳೆರಲ್ಲಾ, ಅಪರ್ಣೆ (ಪಾರ್ವತಿ) ಸಾವಿತ್ರಿ ಮೊದಲೆ ಶ್ಲಿಲವೆಂದು ಬಹಳ ನೇರವಾಗಿ ಮೇಲ್ಕಂಡ ಪುರಾಣ, ಇತಿಹಾಸ, ಕಾವ್ಯಗಳ ಸ್ತ್ರೀ ಪ್ರತೀಕಗಳನ್ನು ನಿರಾಕರಿಸಿ ತನ್ನನ್ನು ತಾನು ಉಳಿಸಿಕೊಳ್ಳಲು ಇಚ್ಛಿಸುತ್ತಾಳೆ. ಕವಿತೆಯ ನಿರೂಪಕಿ ನಿರಾಕರಿಸುತ್ತಿರುವ ಅಮೃತಮತಿಯನ್ನು ಮೊದಲುಗೊಂಡು ಸುನಂದೆ, ಸೀತೆ, ಊರ್ಮಿಳೆ, ಅಪರ್ಣೆ, ಸಾವಿತ್ರಿ ಎಲ್ಲರೂ ಈ ಪುರುಷ ಪ್ರಧಾನ ಸಮಾಜದ ಸರಹದ್ದಿನಲ್ಲಿದ್ದವರು. ಈ ಎಲ್ಲಾ ಮಹಿಳೆಯರ ಮೇಲೆ ಪುರುಷ ಪ್ರಧಾನ ಸಮಾಜ ಹೇರಿರುವ ಮೌಲ್ಯಗಳನ್ನು ಸಂಪ್ರದಾಯಗಳು, ನಡೆಸಿಕೊಳ್ಳುತ್ತಿರುವ ರೀತಿ–ನೀತಿಗಳು ಬಹಳ ದೊಡ್ಡ ಪರಿಣಾಮವನ್ನು ಉಂಟು ಮಾಡಿದೆ. ಈ ಎಲ್ಲದ ಬದುಕುಗಳೂ ಒಂದೊಂದು ಬಗೆಯ ದುರಂತಗಳನ್ನು ಹೊಂದಿವೆ. ಕೆಲವು ಬಾರಿ ಅವರನ್ನೇ ಬಲಿ ಪಡೆದಿವೆ.

ಮೊದಲನೆಯದಾಗಿ ಜನ್ನನ 'ಯಶೋಧರ ಚರಿತೆ'ಯ ಕಾವ್ಯದ ನಾಯಕಿ ಅಮೃತ ಮತಿಯನ್ನು ಕುರಿತಂತೆ ಎಚ್.ಎಲ್.ಪುಷ್ಪ ಅವರು 'ಅಮೃತಮತಿಯ ಸ್ವಗತ' ಕವಿತೆಯನ್ನು ಬರೆದಿದ್ದು ಸ್ತ್ರೀ ಅಸ್ತಿತ್ವದ ಸಂವೇದನೆಯ ಬದುಕಿನ ಸಾಂಗತ್ಯಗಳ ಮತ್ತೊಂದು ರೂಪವನ್ನು ನೀಡಿದ್ದಾರೆ. ಹೀಗೆ ಬಹಳಷ್ಟು ಕವಯತ್ರಿಯರು ಬೇರೆ ಬಗೆಯ ಇತ್ಯಾತ್ಮಕ ನಿಲುವನ್ನು ತಾಳಿ ಮರುಕ, ಕರುಣೆ ಮಿಶ್ರಿತ, ಮನೋವೈಜ್ಞಾನಿಕ ವಿಶ್ಲೇಷಣೆಯನ್ನು ನಡೆಸಿರುವುದು ನೋಡಬಹುದು. ಗಂಡ ಯಶೋಧರನನ್ನು ನಿರಾಕರಿಸಿ ಅರಮನೆಯ ಆನೆಲಾಯದ ಮಾವುತ ಅಷ್ಟಾವಂಕನಿಗೆ ಹಾಡಿನ ಕಾರಣಕ್ಕೆ ಮನಸೋತು ಆತನೊಡನೆ ಸಂಬಂಧ ಬೆಳೆಸಿ ತನ್ನ ಗಂಡನ ಜೊತೆಯಲ್ಲೆ ಅತ್ತೆ ಚಂದ್ರಮತಿಗೆ ವಿಷವಿಟ್ಟು ಕೊಲ್ಲುವ ಅಮೃತಮತಿಯ ಪಾತ್ರದ ನಡೆಗೆ ಕಾವ್ಯದಲ್ಲಿ ಯಾವ ಸಮರ್ಥನೆಯೂ ಇಲ್ಲ.

'ಮನಸಿಜನ ಮಾಯೆ ವಿಧಿಯ ನೆರಂಬಡೆಯ, ಕೊಂದು ಕೂಗದೆ ನರರಾ' ಎಂಬುದು ಜನ್ನ ಕವಿಯ ಮಾತು ಕವನದ ನಿರೂಪಕಿ ಅಂತಹ ಅಮೃತಮತಿಯನ್ನು ನಿರಾಕರಿಸುತ್ತಾಳೆ.

ಜನ್ನನ ಮತ್ತೊಂದು ಜೈನಧಾರ್ಮಿಕ ಕೃತಿ "ಅನಂತನಾಥ ಪುರಾಣ"ದಲ್ಲಿ ಬರುವ 'ಚಂಡಶಾಸನೋಪಾಖ್ಯಾನ' ಇದರಲ್ಲಿ ವಸುಷೇಣನ ಪ್ರಿಯತಮೆಯಾದ ಸುನಂದೆಯ ರೂಪ ಲಾವಣ್ಯಕ್ಕೆ ವಸುಷೇಣನ ಪ್ರಾಣಮಿತ್ರನಾದ ಚಂಡಶಾಸನ ಕಾಮೋನ್ಮತ್ತನಾಗುತ್ತಾನೆ. ಸುನಂದೆಯನ್ನು ಅಪಹರಿಸಿ ಬಲವಂತವಾಗಿ ಕೊಂಡ್ಯೊಯ್ಯುತ್ತಾನೆ. ಒಲಿಸಿಕೊಳ್ಳುವ ನಿಟ್ಟಿನಲ್ಲಿ ಹಲವು ಪ್ರಯೋಗ ಮಾಡಿ ಸೋಲುತ್ತಾನೆ. ಕಡೆಗೆ ವಸುಷೇಣಮ ಮಾಯಾಶಿರವನ್ನು ಮಾಡಿ ಅದನ್ನು ಸುನಂದೆಯ ಮುಂದೆ ಪ್ರದರ್ಶಿಸುತ್ತಾನೆ.

ಮಾಯಾಶಿರವನ್ನು ತನ್ನ ಗಂಡನ ನಿಜವಾದ ತಲೆಯೆಂದೆ ಭ್ರಮಿಸಿ ಹೃದಯವೊಡೆದು ಸತ್ತು ಹೋಗುತ್ತಾಳೆ ಸುನಂದೆ. ಚಂಡಶಾಸನ ಪಾಡಿಯೆಂದು ನಿಜವಾದರೂ ಸತ್ತ ಸುನಂದೆಯ ಕಳೇಬರದ ಜೊತೆಯಾಗಿ ಈತನು ಚಿತೆಯೇರುತ್ತಾನೆ.

ಜನ್ನನ ಈ ಎರಡು ಪಾತ್ರಗಳನ್ನು ಗಮನಿಸಿದರೆ ಗಂಡನ ಮೇಲೆ ಪ್ರೀತಿ ಇಲ್ಲದವಳು ಒಬ್ಬಳು (ಅಮೃತಮತಿ) ಗಂಡನ ಮೇಲೆ ಅತೀವ ಪ್ರೀತಿ ಇರುವವಳು ಒಬ್ಬಳು (ಸುನಂದೆ). ಸುನಂದೆ ತನ್ನ ಗಂಡ ವಸುಷೇಣನ ಮಾಯಶಿರವನ್ನು ತನ್ನ ಗಂಡನ ನಿಜ ತಲೆಯೆಂದೆ ಭ್ರಮಿಸಿ ತಾನೂ ಸಾವಿಗೆ ಶರಣಾಗಿ ಬಿಡುತ್ತಾಳೆ. "ನಾನು ಸುನಂದೆ ಅಲ್ಲ ಗಂಡನ ಅಳಿವಿನಲ್ಲಿ ನಾ ಸಾವ ಕಾಣಲು ಎಂದು ಕವಿತೆಯ ನಿರೂಪಕಿ ಸುನಂದೆಯನ್ನು ನಿರಾಕರಿಸುತ್ತಾಳೆ. ಗಂಡನ ಮೇಲೆ ಪ್ರೀತಿ ಇದ್ದರೆ ಸುನಂದೆಯಾಗುವಂಥದ್ದಲ್ಲ. ಪ್ರೀತಿ ಇಲ್ಲ ಎಂದಾದರೆ ಅಮೃತಮತಿಯಂತೆ ಆಗುವಂಥದ್ದೂ ಅಲ್ಲ.

ಕುಟುಂಬದೊಳಗೆ ಉಳಿದ ಪಾತ್ರಗಳ ಕೆಲವಿದೆ. ಅವು ಜನಜನಿತವಾದ ರಾಮಾಯಣ ಮಹಾಕಾವ್ಯದ ಸೀತೆ ಮತ್ತು ಊರ್ಮಿಳೆ ಸಹೋದರಿಯರು ರಾಮ ಲಕ್ಷ್ಮಣರನ್ನು ವರಿಸಿ ಪುರುಷ ರಾಜಕಾರಣದ ಹಾವು ಏಣಿಯಾಟದಲ್ಲಿ ನಲುಗಿದ ಪಾತ್ರಗಳು. ಕೆ.ಎಸ್.ನರಸಿಂಹಸ್ವಾಮಿ ಅವರು ಇದು ನೂರುರಾಮರು ತೂಗುವರೇ ಒಬ್ಬ ಸೀತೆಗೆ ಅಂಕಿತದಲ್ಲೇ ಅನ್ಯಾಯವಾಗಿದೆ ಸೀತೆಗೆ ಇದು ರಾಮಾಯಣವಲ್ಲ ಸೀತಾಯಣ' ಎಂದರೆ ರಾಷ್ಟ್ರಕವಿ ಕುವೆಂಪು ಮೂಲ ರಾಮಾಯಣದಲ್ಲಿನ ಊರ್ಮಿಳೆಯ ಪಾತ್ರಕ್ಕೆ ಮರುಸೃಷ್ಟಿ ನೀಡಿ ಊರ್ಮಿಳೆಯನ್ನು ಮೌನ ಸಾಧಕ ಎಂದು ಕರೆದಿದ್ದಾರೆ. ಸೀತೆಗೆ ಬೆಂಕಿಗೆ ಬೀಳುವ ಆತ್ಯಂತಿಕ ಸ್ಥಿತಿ ಏರ್ಪಟ್ಟರೆ ಊರ್ಮಿಳೆ ಲಕ್ಷ್ಮಣನ ಕಾಯುವಿಕೆಯಲ್ಲಿಯೇ ವಿರಹದ ಬೆಂಕಿಗೆ ಬಿದ್ದವಳು. ರಾಮನ ಜೊತೆ ಇದ್ದೂ ಸೀತೆ ಲಯಕ್ಕೆ ಒಳಗಾದರೆ ಲಕ್ಷ್ಮಣನಿಂದ ದೂರವಿದ್ದು ಲಯಕ್ಕೆ ಒಳಗಾದವಳು ಊರ್ಮಿಳೆ. ಈ ಸಹೋದರರಿಬ್ಬರನ್ನು ಕವಿತೆ ನಿರೂಪಕಿ ನಿರಾಕರಿಸುತ್ತಾಳೆ.

***"ನಾನು ಸೀತೆಯೂ ಅಲ್ಲ***
***ಅವನೊಡ್ಡಿದ ಅಗ್ನಿಕುಂಡ ಹಾಯಲು***
***ನಾನು ಊರ್ಮಿಳೆಯೂ ಆಗಲಾರೆ***
***ಅವ ದೂರ ಸರಿಯೆ ಸನ್ಯಾಸಿಯಾಗಲು"***

ಪುರಾಣದಲ್ಲಿ ಕಾಣಿಸಿಕೊಳ್ಳುವವರು ಅಪರ್ಣೆ (ಪಾರ್ವತಿ) ಮತ್ತು ಸಾವಿತ್ರಿಯರು. ಅಪರ್ಣೆಯ ಹೋರಾಟ ಶಿವನನ್ನು ತನ್ನ ಪತಿಯನ್ನಾಗಿಸಿಕೊಳ್ಳಲು ಸಾವಿತ್ರಿಯ ಹೋರಾಟ ಸತ್ತ ತನ್ನ ಪತಿಯನ್ನು ಜೀವಂತವಾಗಿಸಿಕೊಳ್ಳಲು ಇಬ್ಬರೂ ತಮ್ಮ ಹೋರಾಟದಲ್ಲಿ ಸಫಲರಾಗುತ್ತಾರೆ ಆದರೆ ಅವರ ಅಸ್ಮಿತೆಯೆದು? ಎಂಬ ಪ್ರಶ್ನೆ ಎದುರಾದರೆ ಅಪರ್ಣೆ ಮತ್ತು ಸಾವಿತ್ರಿಯರು ತಮ್ಮನ್ನು ತಾವೆ ಲಯವಾಗಿಸಿಕೊಂಡವರು. ಈ ಇಬ್ಬರನ್ನು ಕಮಲಾ ಹಂಪನಾ ನಿರಾಕರಿಸುತ್ತಾ ಹೇಳುತ್ತಾರೆ.

***"ನಾನು ಅಪರ್ಣೆಯೂ ಅಲ್ಲ***
***ತಪಸ್ವಿಯಾಗಿ ಅವನ ಪಡೆಯಲು***
***ನಾನು ಸಾವಿತ್ರಿ ಮೊದಲೇ ಅಲ್ಲ***
***ಕೆಳಗೆ ಬಿದ್ದ ಅವನ ಮೇಲೆತ್ತಲು"***

ಈ ಕವಿತೆಯಲ್ಲಿನ ಎಲ್ಲಾ ಪಾತ್ರಗಳು ಅನುಭವಿಸಿದ ಜೀವನದ ದುರಂತ. ಹೋರಾಟಗಳ ಕೇಂದ್ರದಲ್ಲಿ ಇರುವವರು ಅವರ ಪತಿರಾಯರೇ ಈ ಎಲ್ಲಾ ಪಾತ್ರಗಳ ದುರಂತ, ಹೋರಾಟ, ನೋವು ದುಃಖಗಳಲ್ಲಿ ಗಂಡಂದಿರು ಸಾಪೇಕ್ಷವಾಗಿಯೇ ಇದ್ದಾರೆ. ಇವರೆಲ್ಲರೂ ತಮ್ಮಿಂದ ತಾವೆ ತಮ್ಮ ತಮ್ಮ ಸ್ಥಾನಗಳಲ್ಲಿ ಸಮರ್ಥರು, ಲೋಕಪೂಜ್ಯರು ಆಗಿರುವವರೆ ಇವರೆಲ್ಲರ ನೇತ್ಯಾತ್ಮಕ ಅಂಶವೆಂದರೆ ಇವರಾರೂ ತಮಗೊಲಿದ ಹೆಣ್ಣುಮಕ್ಕಳನ್ನು ನನ್ನಂತೆಯೆ ನೀನು ಎಂದು ಪರಿಭಾವಿಸಿದವರಲ್ಲ ಈ ವಿಚಾರವೇ ಅವರ ವ್ಯಕ್ತಿತ್ವದ ಬಹುದೊಡ್ಡ ಕುಂದಾಗಿದೆ. ಲೋಕವನ್ನೇ ಮೆಚ್ಚಿಸಬಲ್ಲ ಇವರೆಲ್ಲರೂ

ಈ ಕಾರಣದ ಹಿನ್ನೆಲೆಯಲ್ಲಿಯೇ ಸತಿಯರ ಬದುಕಿನ ದುರಂತಗಳಿಗೆ ಕಾರಣರೂ ಆಗಿದ್ದಾರೆ.

ಕವಿತೆಯ ನಿರೂಪಕಿಯಾದ ಡಾ.ಕಮಲಾ ಹಂಪನಾ ಅವರಿಗೆ ತಾನಿರುವುದನ್ನು ನಿರಾಕರಿಸಿ ಮತ್ತೆನೂ ಆಗಲು ಹೇಳುವ ಈ ಎಲ್ಲ ಆದರ್ಶದ, ವೈಪರಿತ್ಯದ ಸ್ತ್ರೀ ಪಾತ್ರಗಳಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುವ ಇಚ್ಛೆ ಇಲ್ಲ. ಆದುದರಿಂದ ಕವಯತ್ರಿ ಯಾರಂತಾಗದೆ ಸರಾಸಗಟಾಗಿ ನಿರಾಕರಿಸುತ್ತಾಳೆ.

***"ನಾನೊಬ್ಬ ಮಾನವಳು***
***ನಾನು ನಾನಾಗಿಯೇ ಉಳಿಯುವೆ"***

ಎಂಬ ಅಸ್ಮಿತೆಯಲ್ಲಿ ಸ್ಥಾಪಿತಳಾಗಿದ್ದರೆ ತನ್ನ **'**ಅಸ್ಮಿತೆ**'**ಯನ್ನು ನಿರಾಕರಿಸುವ ಯಾವುದೂ ಇಲ್ಲಿನ ಕವಯತ್ರಿಗೆ ಸ್ವೀಕಾರ ಅರ್ಹವಲ್ಲ. ಆಕೆಯ ಓರ್ವ ಮಾನವಳು ಎಂಬ ಮೂಲಭೂತ ಅಸ್ಮಿತೆಯನ್ನು ನಿರಾಕರಿಸುವ ಪುರುಷ ಪ್ರಧಾನ ಸಮಾಜ ನಿರೂಪಿಸುತ್ತಿರುವ ಯಾವ ಮೌಲ್ಯ, ಪಾತ್ರ, ಆದರ್ಶ ಪ್ರತೀಕಗಳೂ ತಾನೂ ಒಪ್ಪಿಕೊಳ್ಳುವಂಥದ್ದಲ್ಲ ಎಂಬುದು ಕವಯತ್ರಿಯ ಸ್ಪಷ್ಟ ನಿಲುವು. ಪ್ರಾಯಶಃ ಜಾಗೃತ ಮಹಿಳೆಯರೆಲ್ಲರ ನಿಲುವು ಇದೆ ಹೌದು. ಈ ಕವಿತೆ ಸಹೃದಯರಿಗೆ ಸರಳವೆನಿಸದರೂ ತನ್ನ ಸ್ಪಷ್ಟ ಖಚಿತ ನಿಲುವಿನಿಂದಾಗಿಯೇ ಎಲ್ಲರ ಗಮನ ಸೆಳೆಯುತ್ತದೆ.

ಕನ್ನಡ ಸಾಹಿತ್ಯಕ್ಕೆ ಸಾವಿರದ್ಯೆನೂರು ವರ್ಷಗಳ ಚರಿತ್ರೆಯಿದ್ದರೂ 20ನೇ ಶತಮಾನಕ್ಕೆ ಕಾಲಿರಿಸುವವರೆಗೆ ಮಹಿಳೆಯರೆ ರಚಿಸಿದ ಸಾಹಿತ್ಯ ಮಹಿಳಾ ಸಾಹಿತ್ಯವೆಂಬ ಹೆಸರಿನಲ್ಲಿ ಗುರುತಿಸಬಹುದಾದಂಥದ್ದು ಹೆಚ್ಚು ಕಂಡುಬರುವುದಿಲ್ಲ. ಸ್ತ್ರೀಯರು ವಿದ್ಯೆಯಿಂದ ವಂಚಿತರಾದದ್ದು, ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ, ಸಾರ್ವಜನಿಕ ಜೀವನದಲ್ಲಿ ಭಾಗಿಯಾಗುವ ಹೆಚ್ಚಿನ ಅವಕಾಶಗಳು ಸೃಷ್ಟಿಯಾಗದೆ ಹೋದದ್ದು. ಸ್ವಾತಂತ್ರವಿರದ ಅವಲಂಬನೆಯ ಜೀವನವೇ ಪ್ರಧಾನವಾದದ್ದು ಇಂಥ ಅನೇಕ ಕಾರಣಗಳಿಂದಾಗಿ ಮಹಿಳೆ ಕನ್ನಡ ಸಾಹಿತ್ಯದ ಮುಖ್ಯವಾಹಿನಿಯಲ್ಲಿ ಬಹುಕಾಲದವರೆಗೆ ಅನನ್ಯತೆಯನ್ನು ಕಂಡುಕೊಳ್ಳಲು ಸಾಧ್ಯವಾಗಲಿಲ್ಲ. ಇದಕ್ಕೆ ಅಲ್ಲೊಂದು ಇಲ್ಲೊಂದು ಅಪವಾದಗಳಿರಬಹುದು ಮಹಿಳಾ ಸಾಹಿತ್ಯದ ನೆಲೆಯನ್ನು ಗುರುತಿಸುವಂತಹ ಸೃಜನಶೀಲತೆ ನಮಗೆ ಕಾಣುವುದು ಹೆಚ್ಚಾಗಿ ಸ್ವಾತಂತ್ರ್ಯದ ಉತ್ತರದ ಇಪ್ಪತ್ತು ಹಾಗೂ ಇಪ್ಪತ್ತೊಂದನೇಯ ಶತಮಾನದಲ್ಲಿಯೇ.

**ಪರಾಮರ್ಶನ ಗ್ರಂಥಗಳು**


- ಭಟ್ಟ ಜಿ.ಎಸ್. (ಸಂ.). (1999). *ಜನ್ನ ಒಂದು ಅವಲೋಕನ.* ಚೇತನ ಬುಕ್‌ಹೌಸ್.
- ಕಮಲಾ ಹಂಪನಾ. *ಬಿಂದಲಿ: ವಚನ ಸಂಕಲನ*
- ಪುಷ್ಪ ಎಚ್.ಎಲ್. (2020). *ಅಮೃತಮತಿಯ ಸ್ವಗತ.* ಕಿರಂ ಪ್ರಕಾಶನ.
- ಶಿವಕುಮಾರ್ ಕೆ.ವೈ. (2000). ಜನ್ನ: ಒಂದು ಅಧ್ಯಯನ. ಚೇತನ ಬುಕ್‌ಹೌಸ್.
- ವೇದಾ ಎಂ.ಎಸ್. *ಮಹಿಳಾ ಕಾವ್ಯ ಕಾರಣ.* ಸಂವಹನ ಪ್ರಕಾಶನ.